# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1384 |
| ವಿಧಾನ ಪರಿಷತ್ತು ಸದಸ್ಯರ ಹೆಸರು | : | ಡಾ: ವೈ.ಎ ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 16.03.2021 |
| ಉತ್ತರಿಸುವ ಸಚಿವರು | : | ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕರ್ನಾಟಕ ರಾಜ್ಯದಲ್ಲಿರುವ ಪಡಿತರ ಚೀಟಿಗಳ ಸಂಖ್ಯೆ ಎಷ್ಟು; ಇವುಗಳಲ್ಲಿ ಅಸಲಿ/ನಕಲಿ ಪಡಿತರ ಚೀಟಿಗಳೆಷ್ಟು; | ಕರ್ನಾಟಕ ರಾಜ್ಯದಲ್ಲಿ ಈ ಕೆಳಕಂಡಂತೆ ಪಡಿತರ ಚೀಟಿಗಳು ಚಾಲ್ತಿಯಲ್ಲಿರುತ್ತವೆ.<br><br>ಅಂತ್ಯೋದಯ ಅನ್ನ ಪಡಿತರ ಚೀಟಿಗಳು: 1090951<br>ಆದ್ಯತಾ ಪಡಿತರ ಚೀಟಿಗಳು: 11683545<br>ಆದ್ಯತೇತರ ಪಡಿತರ ಚೀಟಿಗಳು: 2125799<br>ಒಟ್ಟು: 14900295<br><br>ಪ್ರಸ್ತುತ ಚಾಲ್ತಿಯಲ್ಲಿರುವ ಪಡಿತರ ಚೀಟಿಗಳನ್ನು ಅಸಲಿ ಎಂದು ಪರಿಗಣಿಸಲಾಗಿದ್ದು, ಅನರ್ಹ ಪಡಿತರ ಚೀಟಿಗಳ ತಪಾಸಣೆಯನ್ನು ನಿರಂತವಾಗಿ ಕೈಗೊಳ್ಳಲಾಗುತ್ತಿದೆ. |
| ಆ | ಮೇಲ್ಕಂಡ ಕಾರ್ಡ್ ದಾರರಿಗೆ ಸರ್ಕಾರ ವಿತರಿಸುತ್ತಿರುವ ಪಡಿತರ ಎಷ್ಟು; | ಪ್ರತಿ ಮಾಹೆ ಆದ್ಯತಾ ಪಡಿತರ ಚೀಟಿಯ ಪ್ರತಿ ಸದಸ್ಯರಿಗೆ 5 ಕೆ.ಜಿ ಅಕ್ಕಿ ಹಾಗೂ ಪ್ರತಿ ಪಡಿತರ ಚೀಟಿಗೆ 2 ಕೆ.ಜಿ ಗೋಧಿ. ಅಂತ್ಯೋದಯ ಅನ್ನ ಪಡಿತರ ಚೀಟಿಗೆ 35 ಕೆ.ಜಿ ಅಕ್ಕಿಯನ್ನು ಉಚಿತವಾಗಿ ವಿತರಿಸಲಾಗುತ್ತಿದೆ. ಆದ್ಯತೇತರ ಪಡಿತರ ಚೀಟಿಯನ್ನು ಹೊಂದಿದ್ದು, ಆಹಾರ ಧಾನ್ಯಗಳನ್ನು ಪಡೆಯಲು ಸಹಮತಿ ನೀಡಿರುವ ಏಕ ಸದಸ್ಯ ಪಡಿತರ ಚೀಟಿಗೆ 5 ಕೆ.ಜಿ ಅಕ್ಕಿ ಹಾಗೂ ಎರಡಕ್ಕಿಂತ ಹೆಚ್ಚು ಸದಸ್ಯರಿರುವ ಪಡಿತರ ಚೀಟಿಗೆ 10 ಕೆ.ಜಿ ಅಕ್ಕಿಯನ್ನು ರೂ. 15/-ರ ಸಬ್ಸಿಡಿ ದರದಲ್ಲಿ ವಿತರಿಸಲಾಗುತ್ತಿದೆ. |
| ಇ | ನಕಲಿ ಕಾರ್ಡ್ ಅಡಿಯಲ್ಲಿ ಸರ್ಕಾರದ ಬೊಕ್ಕಸಕ್ಕೆ ಆಗುತ್ತಿರುವ ನಷ್ಟ ಎಷ್ಟು; | ಪಡಿತರ ಚೀಟಿಗಳಲ್ಲಿ ಸದಸ್ಯರ ಹೆಸರನ್ನು ಆಧಾರ್ ಸಂಖ್ಯೆಗೆ ಜೋಡಿಸಿದ(ಲಿಂಕ್) ನಂತರ ನಕಲಿ ಪಡಿತರ ಚೀಟಿಗಳು ಇರುವುದಿಲ್ಲ. ಆದರೆ ಅನರ್ಹರು ಆದ್ಯತಾ ಪಡಿತರ ಚೀಟಿಗಳನ್ನು ಹೊಂದಿರುವ ದೂರುಗಳಿದ್ದು, ಈ ಬಗ್ಗೆ ರಾಜ್ಯದಲ್ಲಿ ನಿರಂತರವಾಗಿ ಅನರ್ಹ ಪಡಿತರ ಚೀಟಿಗಳನ್ನು ಪತ್ತೆ ಹಚ್ಚುವ ಕಾರ್ಯ ನಡೆಯುತ್ತಿದ್ದು, 2018ನೇ ಮಾಹೆಯಿಂದ ಇವರೆವಿಗೂ |

| | | |
|---|---|---|
| | | ಒಟ್ಟು 9749 ಅನರ್ಹ ಅಂತ್ಯೋದಯ ಅನ್ನ ಪಡಿತರ ಚೀಟಿ ಹಾಗೂ 229527 ಅನರ್ಹ ಆದ್ಯತಾ ಪಡಿತರ ಚೀಟಿಗಳನ್ನು ಪತ್ತೆ ಹಚ್ಚಿ ರದ್ದುಪಡಿಸಲಾಗಿರುತ್ತದೆ. ಹಾಗೂ ರೂ. 30736170/- ದಂಡವನ್ನು ವಸೂಲಿ ಮಾಡಲಾಗಿದೆ. |
| ಈ | ಪಡಿತರದೊಂದಿಗೆ ಸಕ್ಕರೆ ಬದಲಿಗೆ ಬೆಲ್ಲವನ್ನು ನೀಡಲು ಸರ್ಕಾರ ಉದ್ದೇಶಿಸಿದೆಯೇ; ಉದ್ದೇಶಸಿದ್ದಲ್ಲಿ, ಯಾವಾಗಿನಿಂದ ಪ್ರಾರಂಭಿಸಲಾಗುವುದು | ಪ್ರಸ್ತಾವನೆ ಇರುವುದಿಲ್ಲ. |

ಆನಾಸ 104 ಡಿಆರ್‌ಎ 2021 (ಇ-ಆಫೀಸ್)

(ಉಮೇಶ್ ವಿ. ಕತ್ತಿ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.